ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 969 [1036]

ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ
[ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು]

ಉತ್ತರಿಸುವ ದಿನಾಂಕ : 22.12.2021

ಉತ್ತರಿಸುವ ಸಚಿವರು : ಕಂದಾಯ ಸಚಿವರು

| | | |
|---|---|---|
| (ಅ) | ರಾಜ್ಯದಲ್ಲಿ ಕಂದಾಯ ಇಲಾಖೆಯ 79ಎ ಮತ್ತು 79ಬಿ ಕಾನೂನುಗಳನ್ನು ಕೈ ಬಿಡಲಾಗಿದೆಯೇ; ಇದ್ದಲ್ಲಿ ಯಾವಾಗ ಕೈಬಿಡಲಾಗಿದೆ; [ವಿವರ ನೀಡುವುದು] | ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 54 ಶಾಸನ 2020 ದಿನಾಂಕ: 30.12.2020 ರಲ್ಲಿ ಕರ್ನಾಟಕ ಭೂ ಸುಧಾರಣಾ ಕಾಯ್ದೆ, 1961ರ ಕಲಂ 79ಎ ಮತ್ತು 79ಬಿ ಅನ್ನು ದಿನಾಂಕ: 01.03.1974 ರಿಂದ ಪೂರ್ವಾನ್ವಯವಾಗುವಂತೆ ತೆಗೆದುಹಾಕಲಾಗಿದೆ. |
| (ಆ) | ಕೈ ಬಿಡಲಾಗಿದ್ದಲ್ಲಿ ಆದೇಶಕ್ಕಿಂತ ಪೂರ್ವದಲ್ಲಿ ದಾಖಲಾಗಿದ್ದ ಪ್ರಕರಣಗಳನ್ನು ಮುಂದುವರೆಸಲಾಗುವುದೆ; ಅಥವಾ ಕೈಬಿಡಲಾಗುವುದೆ; [ಪೂರ್ಣ ವಿವರ ನೀಡುವುದು] | ಈ ತಿದ್ದುಪಡಿಯಿಂದ ಈಗಾಗಲೇ ಇತ್ಯರ್ಥವಾದ ಪ್ರಕರಣಗಳಿಗೆ ಯಾವುದೇ ಭಾದಕವಾಗದೆ ಹಾಗೆ ಉಳಿಯಲಿವೆ. ಮುಂದುವರೆದು, ಯಾವುದೇ ನ್ಯಾಯಾಲಯ, ನ್ಯಾಯಾಧೀಕರಣ ಅಥವಾ ಸಕ್ಷಮಗೊಂಡ ಇತರ ಪ್ರಾಧಿಕಾರದ ಮುಂದೆ ಬಾಕಿಯಿರುವ ಎಲ್ಲಾ ಪ್ರಕರಣಗಳು ಈ ಮೂಲಕ ಕೊನೆಗೊಳ್ಳಲಿವೆ. |
| (ಇ) | ಈ ವಿಷಯಕ್ಕೆ ಸಂಬಂಧಿಸಿದಂತೆ ರಾಮನಗರ ತಾಲ್ಲೂಕು ಕಛೇರಿಯಲ್ಲಿ ಇರುವ ಪ್ರಕರಣಗಳೆಷ್ಟು; ಅವುಗಳನ್ನು ಯಾವ ಕಾಲಮಿತಿಯೊಳಗೆ ಮುಕ್ತಾಯಗೊಳಿಸಲು ಉದ್ದೇಶಿಸಲಾಗಿದೆ; [ವಿವರ ನೀಡುವುದು] | ರಾಮನಗರ ತಾಲ್ಲೂಕು ಕಛೇರಿಯಲ್ಲಿ 79ಎ ಮತ್ತು 79ಬಿ ಪ್ರಕರಣಗಳು ಬಾಕಿ ಇರುವುದಿಲ್ಲ. |
| (ಈ) | ರಾಮನಗರ ಉಪ ವಿಭಾಗಾಧಿಕಾರಿಗಳ ಕಛೇರಿ, ತಾಲ್ಲೂಕು ಕಛೇರಿ ಮತ್ತು ಭೂಮಿ ಮಾನೀಟರಿಂಗ್ ಸೆಲ್‌ಗಳಲ್ಲಿ ವಿನಾಕಾರಣ ವಿಳಂಬನೀತಿ ಅನುಸರಿಸುತ್ತಿರುವುದನ್ನು ಲಂಚಕ್ಕಾಗಿ ಬೇಡಿಕೆಯೆಂದು ಪರಿಗಣಿಸಬೇಕೆ ಅಥವಾ ಉದ್ದೇಶಪೂರ್ವಕವೆಂದು ತಿಳಿಯಬೇಕೆ; ಈ ಬಗ್ಗೆ ವಿವರ ನೀಡುವುದು | ರಾಮನಗರ ಉಪ ವಿಭಾಗಾಧಿಕಾರಿ ಕಛೇರಿ, ತಾಲ್ಲೂಕು ಕಛೇರಿ ಮತ್ತು ಭೂಮಿ ಮಾನೀಟರಿಂಗ್ ಸೆಲ್‌ಗಳಲ್ಲಿ ಯಾವುದೇ ವಿಳಂಬ ನೀತಿ ಅನುಸರಿಸುತ್ತಿರುವುದಿಲ್ಲ ಹಾಗೂ ಯಾವುದೇ ಪ್ರಕರಣಗಳು ಬಾಕಿ ಇರುವುದಿಲ್ಲ. |
| (ಉ) | ಈ ಬಗ್ಗೆ ವಿಳಂಬ/ಉದ್ದೇಶ ಪೂರ್ವಕವಾಗಿ ವಿಲೇ ಇಡುವವರ ಮೇಲೆ ಸರ್ಕಾರದಿಂದ ಯಾವ ಕ್ರಮಗಳನ್ನು ಕೈಗೊಳ್ಳಲಾಗುವುದು? [ವಿವರ ನೀಡುವುದು] | ಉದ್ಭವಿಸುವುದಿಲ್ಲ. |

ಸಂಖ್ಯೆ: ಆರ್‌ಡಿ 36 ಎಲ್‌ಆರ್‌ಎಸ್ 2021

[ಆರ್.ಅಶೋಕ]
ಕಂದಾಯ ಸಚಿವರು.